


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 30-03-2021 ಪ್ರಶ್ನೆ ಸಂಖ್ಯೆ : 2093(2423)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಘೋಟ್ನೆಕರ ಶ್ರೀಕಾಂತ ಲಕ್ಷ್ಮಣ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 30-03-2021

ಉತ್ತರಿಸುವ ಸಚಿವರು: ಮಾನ್ಯ ನಗರಾಭಿವೃದ್ಧಿ ಸಚಿವರು

ವಿಷಯ : ಕುಡಿಯುವ ನೀರಿನ ಬಗ್ಗೆ

(ಅ) ಕಾರವಾರ ಜಿಲ್ಲೆಯ ಹಳಿಯಾಳ ದಾಂಡೇಲಿ ಪುರಸಭೆ/ನಗರ ಸಭೆ ವ್ಯಾಪ್ತಿಯ ಎಲ್ಲಾ ವಾರ್ಡ್‌ಗಳಲ್ಲಿ ದಿನದ 24 ಗಂಟೆ ಕುಡಿಯುವ ನೀರು ಪೂರೈಕೆ ಯೋಜನೆ ಆರಂಭವಾಗಿದೆಯೇ;

(ಆ) ಈ ಯೋಜನೆಗಾಗಿ ಸರ್ಕಾರ ಇಲ್ಲಿಯವರೆಗೆ ಎಷ್ಟು ಹಣ ಖರ್ಚು ಮಾಡಿದೆ, ಇನ್ನೂ ಎಷ್ಟು ಕಾಮಗಾರಿ ಬಾಕಿ ಇದೆ, ಕಾಮಗಾರಿ ಯಾವ ಏಜೆನ್ಸಿಗೆ ನೀಡಲಾಗಿದೆ;

(ಇ) ಯೋಜನೆ ಕಾಮಗಾರಿ ಕಳಪೆಯಾಗಿರುವುದರಿಂದ ಅನೇಕ ಕಡೆ ಪೈಪುಗಳು ಒಡೆದು ನೀರು ಪೋಲಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದಕ್ಕೆ ಯಾರು ಹೊಣೆ; ಈ ರೀತಿ ಕಳಪೆ ಕಾಮಗಾರಿ ಮಾಡಿರುವ ಗುತ್ತಿಗೆದಾರರ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ? (ಸೂಕ್ತ ವಿವರ ನೀಡುವುದು)